# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಏಪ್ರಿಲ್ ೧೦, ೨೦೧೪ (ಚೈತ್ರ ೨೦, ಶಕ ವರ್ಷ ೧೯೩೬)<br>**Bangalore, Thursday, April 10, 2014 (Chaithra 20, Shaka Varsha 1936)** | ಸಂಚಿಕೆ ೧೫<br>**Issue 15** |
|---|---|---|


## ಭಾಗ ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

### IN THE COURT OF THE CITY CIVIL AND SESSIONS JUDGE, MAYO HALL, BANGALORE (CCH-21)

**P & SC 25009/2014** **Hg: 29-4-2014**

**PETITIONERS :**

1. Smt. Kokila, D/o Narayanappa, Aged about 42 years, No.106/2, New Bennimangala, Indiranagar post, Bangalore-560 036.
2. Sri. Prakash, S/o Narayanappa, Aged about 40 years No.7/8, New Bennimangala, Old Madras Road, Indiranagar post, Bangalore-560 036.
3. Jumana Rani @ Jumana, D/o Narayanappa, Aged about 47 years, No.6/3, New Bennimangala, Old Madras Road, Indiranagar post, Bangalore-560 036.
4. Ravieal W/o Jeorge, D/o Narayanappa, Aged about 45 years, No.106/2, New Bennimangala, Old Madras Road, Indiranagar Post, Bangalore-560 036.

**AND**

**RESPONDENTS:**

**NIL**

**PUBLIC NOTICE**

Notice is hereby given that a petition has been made to this Court U/s 276 of the Indian Succession Act, for grant of Probate of the will executed by S.Nanjunda Shastry on 19-11-1991 who died on 20-06-1992 at Bangalore.

Be it to know that no caveat has been entered and the said petition is posted for hearing on 29-04-2014, at 11.00 A.M. Any persons claiming to have any interest may come and see the proceedings before the grant of Probate in favour of petitioners.

Given under my hand and seal of the court on this the day 13th day of March 2014.

BY ORDER OF THE COURT
**Deputy Registrar**
City Civil Court, Mayo hall Unit, Bangalore.

**P.D. 17**
**SC-5**

### ಜಿಲ್ಲಾಧಿಕಾರಿಯವರ ಕಛೇರಿ, ತುಮಕೂರು ಜಿಲ್ಲೆ, ತುಮಕೂರು.

**ಅಧಿಕೃತ ಜ್ಞಾಪನ**

**ಸಂಖ್ಯೆ: ವಿಎಎಸ್.ಸಿಆರ್:266/10-11, ತುಮಕೂರು, ದಿನಾಂಕ: 04-03-2014**

**ವಿಷಯ :** ತುಮಕೂರು ಜಿಲ್ಲೆಯ ಕಂದಾಯ ಘಟಕದಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಕುರಿತು.

ಉಲ್ಲೇಖ : 1. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 128 ಸೇನೇನಿ 2006, ದಿನಾಂಕ: 01–08–2009.

2. ಸರ್ಕಾರದ ಪತ್ರ ಸಂಖ್ಯೆ: ಕಂಇ 04 ಬಿಎಸ್‌ಸಿ 2011, ದಿನಾಂಕ: 25–02–2011.

3. ಸರ್ಕಾರದ ಆದೇಶ ಸಂಖ್ಯೆ: ಕಂಇ 33 ಡಿಎಸ್‌ಪಿ 2012, ದಿನಾಂಕ: 05–06–2012.

4. ಸರ್ಕಾರದ ಸುತ್ತೋಲೆ ಸಂಖ್ಯೆ: ಕಂಇ 100 ಬಿಎಸ್‌ಸಿ 2011, ದಿನಾಂಕ: 29–06–2012.

5. ಈ ಕಛೇರಿಯ ಅಧಿಸೂಚನೆ ಸಂಖ್ಯೆ ಗ್ರಾ.ಲೆ ಸಿಬ್ಬಂದಿ.ಸಿ.ಆರ್.266/10–11, ದಿನಾಂಕ: 30–07–2012.

6. ಈ ಕಛೇರಿಯ ತಿದ್ದುಪಡಿ ಅಧಿಸೂಚನೆ ಸಂಖ್ಯೆ ಗ್ರಾ.ಲೆ ಸಿಬ್ಬಂದಿ.ಸಿ.ಆರ್.266/10–11, ದಿನಾಂಕ: 07–08–2012.

7. ಈ ಕಛೇರಿಯ ಪ್ರಕಟಣೆ ಸಂಖ್ಯೆ ಗ್ರಾ.ಲೆ ಸಿಬ್ಬಂದಿ.ಸಿ.ಆರ್.266/10–11, ದಿನಾಂಕ: 26–08–2013 ಮತ್ತು 04–09–2013.

8. ಈ ಕಛೇರಿಯ ಅಧಿಸೂಚನೆ ಸಂಖ್ಯೆ ಗ್ರಾ.ಲೆ ಸಿಬ್ಬಂದಿ.ಸಿ.ಆರ್.266/10–11, ದಿನಾಂಕ: 20–09–2013
(ಅಂತಿಮ ಆಯ್ಕೆ ಪಟ್ಟಿ ಮತ್ತು ಕಾಯ್ದಿರಿಸಲಾದ ಪಟ್ಟಿ)

ಸರ್ಕಾರದ ಉಲ್ಲೇಖ (2)ರ ಪತ್ರದಲ್ಲಿ ತುಮಕೂರು ಜಿಲ್ಲೆಯಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳನ್ನು ಭರ್ತಿ ಮಾಡಲು ಅಗತ್ಯ ಕ್ರಮಗಳನ್ನು ಕೈಗೊಳ್ಳಲು ಸರ್ಕಾರ ಅನುಮೋದನೆಯನ್ನು ನೀಡಿದೆ. ಅದರಂತೆ ನೇಮಕಾತಿ ಪ್ರಕ್ರಿಯೆಯನ್ನು ಉಲ್ಲೇಖ (1)(2) ಮತ್ತು (4)ರ ಅನ್ವಯ ಹಾಗೂ ಕರ್ನಾಟಕ ನಾಗರಿಕ ಸೇವೆ (Revenue Sub ordinate Branch) (Cadre and Recruitment) (Amendment) ನಿಯಮಗಳು, 2009ರಂತೆ ಉಲ್ಲೇಖ (6)ರ ತಿದ್ದುಪಡಿ ಅಧಿಸೂಚನೆಯಲ್ಲಿ ತಿಳಿಸಿರುವಂತೆ ತುಮಕೂರು ಜಿಲ್ಲಾ ಕಂದಾಯ ಘಟಕದಲ್ಲಿ ಉಲ್ಲೇಖ (6)ರ ತಿದ್ದುಪಡಿ ಅಧಿಸೂಚನೆ ಹೊರಡಿಸಲಾದ ದಿನಾಂಕದಂದು ಖಾಲಿ ಇದ್ದ 81 ಗ್ರಾಮಲೆಕ್ಕಿಗರ ಹುದ್ದೆ ಹಾಗೂ ಸರ್ಕಾರ ಉಲ್ಲೇಖ(3)ರ ಆದೇಶದಲ್ಲಿ ಹೊಸ ನಾಡ ಕಛೇರಿಗಳಿಗೆ ಸೃಜಿಸಲಾಗಿರುವ 20 ಗ್ರಾಮಲೆಕ್ಕಿಗರ ಹುದ್ದೆಗಳು ಸೇರಿ ಒಟ್ಟು 101 ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರ ನೇಮಕಾತಿಯ ಮೂಲಕ ಭರ್ತಿಗೊಳಿಸಲು ಗ್ರಾಮಲೆಕ್ಕಿಗರ ನೇರ ನೇಮಕಾತಿ ಪ್ರಾಧಿಕಾರದ ನಿರ್ಣಯದಂತೆ ಕ್ರಮ ಕೈಗೊಳ್ಳಲಾಗಿದೆ.

ತುಮಕೂರು ಜಿಲ್ಲಾ ಕಂದಾಯ ಘಟಕದಲ್ಲಿ ಖಾಲಿ ಇದ್ದ 101 ಗ್ರಾಮಲೆಕ್ಕಿಗರ ಹುದ್ದೆಗಳನ್ನು ಭರ್ತಿ ಮಾಡಲು ಆನ್‌ಲೈನ್ ಮೂಲಕ ಸ್ವೀಕೃತವಾದ ಅರ್ಜಿಗಳಲ್ಲಿ 1:5 ಅನುಪಾತ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು 29–09–2012ರಂದು ಪ್ರಕಟಿಸಿ ಸದರಿ ಪಟ್ಟಿಯಲ್ಲಿನ ಅಭ್ಯರ್ಥಿಗಳ ಮೂಲ ದಾಖಲೆಯನ್ನು ಪರಿಶೀಲಿಸಲಾಗಿದೆ. ಅಂಗವಿಕಲ ಅಭ್ಯರ್ಥಿಗಳಿಗೆ ಸಂಬಂಧಿಸಿದಂತೆ ಒಬ್ಬ ಅಭ್ಯರ್ಥಿಯು 1:5ರಲ್ಲಿ ಲಭ್ಯರಾಗದ ಕಾರಣ Ranking list ನಿಂದ ಮೆರಿಟ್‌ನಂತೆ ಮೂಲ ದಾಖಲೆ ಪರಿಶೀಲನೆಗೆ ಒಳಪಡಿಸಿದ್ದು, ನಂತರದಲ್ಲಿ ದಿನಾಂಕ:26–08–2013ರಂದು ಪ್ರಕಟಣೆಯೊಂದಿಗೆ 1:1 Provisional Selection list & Waiting list ಅನ್ನು ಹೊರಡಿಸಿ ದಿನಾಂಕ:26–08–2013 ರಿಂದ 02–09–2013ರ ವರೆಗೆ ಅಭ್ಯರ್ಥಿಗಳಿಂದ ಆಕ್ಷೇಪಣೆ / ತಕರಾರು ಇದ್ದಲ್ಲಿ ಸಲ್ಲಿಸುವಂತೆ ತಿಳಿಸಲಾಗಿತ್ತು. ದಿನಾಂಕ:26–08–2013 ರಿಂದ 02–09–2013ರ ಅವಧಿಯಲ್ಲಿ ಸ್ವೀಕೃತವಾಗಿರುವ ಆಕ್ಷೇಪಣೆ / ತಕರಾರು ಕುರಿತು ಪರಿಶೀಲಿಸಿ ವಿಲೇವಾರಿ ಮಾಡಲಾಗಿದೆ. ಅರ್ಹ ಅಭ್ಯರ್ಥಿಗಳ ಆಯ್ಕೆ ಪಟ್ಟಿಯನ್ನು ಮೆರಿಟ್ ಮತ್ತು ಮೀಸಲಾತಿ ಆಧಾರದ ಮೇರೆಗೆ 101 ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ಮತ್ತು ಕಾಯ್ದಿರಿಸಿದ ಪಟ್ಟಿಯನ್ನು ಜಿಲ್ಲಾಧಿಕಾರಿಯವರ ವೆಬ್ ಸೈಟ್ www.tumkur.nic.in ರಲ್ಲಿ ಉಲ್ಲೇಖ(8)ರ ಅಧಿಸೂಚನೆಯೊಂದಿಗೆ ಪ್ರಚುರಪಡಿಸಲಾಗಿದ್ದು, ಅಂತಿಮ ಆಯ್ಕೆ ಪಟ್ಟಿಯಲ್ಲಿನ ಅಭ್ಯರ್ಥಿಗಳ ಪೈಕಿ ಮೂಲ ದಾಖಲೆಗಳನ್ನು ಸಲ್ಲಿಸಿರುವ ಅಭ್ಯರ್ಥಿಗಳಲ್ಲಿ ಮೂಲ ದಾಖಲೆಗಳ ಪರಿಶೀಲನಾ ವರದಿ ಬಂದಿರುವ ಹಾಗೂ ಪೂರ್ಣ ಪ್ರಮಾಣದಲ್ಲಿ ನೈಜತಾ ವರದಿ ಬಂದಿರುವ ಈ ಕೆಳಕಾಣಿಸಿರುವ ಅಭ್ಯರ್ಥಿಗಳನ್ನು ತುಮಕೂರು ಜಿಲ್ಲಾ ಕಂದಾಯ ಘಟಕದಲ್ಲಿನ ಗ್ರಾಮಲೆಕ್ಕಿಗರ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಹೊರಡಿಸಲಾದ ಅಧಿಸೂಚನೆ / ಪ್ರಕಟಣೆಗಳ ವಿರುದ್ಧ ರಾಜ್ಯದ ಮಾನ್ಯ ಉಚ್ಛ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಪಿಟಿಷನ್ ನಂ.41070–41071ರಲ್ಲಿ ಮಾನ್ಯ ಉಚ್ಛ ನ್ಯಾಯಾಲಯದ ಮುಂದಿನ ಆದೇಶಕ್ಕೆ ಈ ನೇಮಕಾತಿ ಆದೇಶ ಒಳಪಟ್ಟು ನೇಮಕಾತಿ ಮಾಡಲಾಗಿದೆ.

ಈ ಆದೇಶದಲ್ಲಿನ ಕ್ರಮ ಸಂಖ್ಯೆ 01 ರಿಂದ 02ರಲ್ಲಿ ಹೆಸರಿಸಿರತಕ್ಕ ಆಯ್ಕೆಯಾದ ಅಭ್ಯರ್ಥಿಗಳನ್ನು ಗ್ರಾಮಲೆಕ್ಕಾಧಿಕಾರಿ ಹುದ್ದೆಯ ರೂ.11600–200–12000–250–13000–300–14200–350–15600–400–17200–450–19000–500–21000 ವೇತನ ಶ್ರೇಣಿಯಲ್ಲಿ ಅವರ ಹೆಸರಿನ ಎದುರು ನಮೂದಿಸಿರುವ ಕಂದಾಯ ವೃತ್ತಗಳಿಗೆ ಈ ಕೆಳಕಂಡ ನಿಬಂಧನೆಗಳನುಸಾರ ನೇಮಕಾತಿ ಮಾಡಿ ಆದೇಶ ಹೊರಡಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಗ್ರಾಮಲೆಕ್ಕಿಗರ ಹುದ್ದೆಗೆ ನೇಮಕ ಮಾಡಲಾದ ತಾಲ್ಲೂಕು ಹಾಗೂ ಸ್ಥಳ | ಕರ್ತವ್ಯದ ಮೇಲೆ ಹಾಜರಾಗಬೇಕಾದ ಕಛೇರಿ |
|---|---|---|---|
| 1 | 2 | 3 | 4 |
| 1 | ಶ್ರೀಮತಿ ಚೈತ್ರ ಎಂ.ಎಂ.<br>ಕೋಂ ನವೀನ್ ಕುಮಾರ್ ಬಿ.ಎಂ.ಬಾಗುವಾಳ ಗ್ರಾಮ, ಗುಡಿಗೊಂಡನಹಳ್ಳಿ ಅಂಚೆ, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ. | ದೊಡ್ಡಣ್ಣೇಗೆರೆ ವೃತ್ತ, ಹಂದನಕೆರೆ ಹೋಬಳಿ, ಚಿಕ್ಕನಾಯಕನಹಳ್ಳಿ ತಾಲ್ಲೂಕು. | ತಾಲ್ಲೂಕು ಕಛೇರಿ, ಚಿಕ್ಕನಾಯಕನಹಳ್ಳಿ ತಾಲ್ಲೂಕು. |
| 2 | ನಾಗರಾಜ ರಾಮಚಂದ್ರಗೌಡ,<br>ಬಿನ್ ರಾಮಚಂದ್ರಗೌಡ, ಹಲಗೇಸರ ಗ್ರಾಮ, ದೇವಿಸರ ಅಂಚೆ, ಸಿದ್ದಾಪುರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ. | ದೊಡ್ಡಬಿದರೆ ವೃತ್ತ, ಹುಳಿಯಾರು ಹೋಬಳಿ, ಚಿಕ್ಕನಾಯಕನಹಳ್ಳಿ ತಾಲ್ಲೂಕು. | ತಾಲ್ಲೂಕು ಕಛೇರಿ, ಚಿಕ್ಕನಾಯಕನಹಳ್ಳಿ ತಾಲ್ಲೂಕು. |

**ಷರತ್ತುಗಳು:**

1. ನೇಮಕವಾದ ಅಭ್ಯರ್ಥಿಗಳು ಈ ಆದೇಶ ದಿನಾಂಕದಿಂದ 15 ದಿವಸಗಳೊಳಗಾಗಿ ಅವರ ಹೆಸರಿನ ಮುಂದೆ ಸೂಚಿಸಿರತಕ್ಕ ತಾಲ್ಲೂಕು ತಹಸೀಲ್ದಾರ್‌ರವರ ಸಮಕ್ಷಮದಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

2. ಅಭ್ಯರ್ಥಿಯು ತನ್ನ ಹುಟ್ಟಿದ ದಿನಾಂಕ, ಶೈಕ್ಷಣಿಕ ಅರ್ಹತೆಗಳ ಪ್ರಮಾಣ ಪತ್ರ ಹಾಗೂ ಸಕ್ಷಮ ಪ್ರಾಧಿಕಾರದಿಂದ ನೀಡಲ್ಪಟ್ಟ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿಯಡಿ ಆಯ್ಕೆಯಾದ ಅಭ್ಯರ್ಥಿಗಳು ಮಾತ್ರ) ಹಾಗೂ ಅಭ್ಯರ್ಥಿಯು ವಾಸಿಸುತ್ತಿರುವ ಕ್ಷೇತ್ರ, ಸಂಬಂಧಿಸಿದ ಕನಿಷ್ಠ ಇಬ್ಬರು ಗಣ್ಯವ್ಯಕ್ತಿಗಳಿಂದ ನೀಡಲ್ಪಟ್ಟ ನಡತೆ ಪ್ರಮಾಣ ಪತ್ರ ಇವುಗಳ ಮೂಲ ಪ್ರತಿಗಳನ್ನು ಕರ್ತವ್ಯಕ್ಕೆ ಹಾಜರಾಗುವ ಸಂದರ್ಭದಲ್ಲಿ ತಹಶೀಲ್ದಾರ್ ಇವರಿಗೆ ನೀಡತಕ್ಕದ್ದು. ಅಭ್ಯರ್ಥಿಯ ಗುರುತಿನ ಬಗ್ಗೆ ನಿಕರವಾಗಿ ಪರಿಶೀಲಿಸಿಕೊಂಡ ನಂತರ ಕರ್ತವ್ಯಕ್ಕೆ ತೆಗೆದುಕೊಳ್ಳಲು ತಹಶೀಲ್ದಾರ್ ಇವರಿಗೆ ಸೂಚಿಸಿದೆ.
3. ಅಭ್ಯರ್ಥಿಗಳು ಕೆಲಸಕ್ಕೆ ಹಾಜರಾದ ದಿನಾಂಕದಿಂದ 2 ವರ್ಷಗಳ ಅವಧಿಗೆ ಪರಿವೀಕ್ಷಣಾ (ಪ್ರೊಬೇಷನರಿ) ಅವಧಿಯಲ್ಲಿದ್ದು ಅವರು ಈ ಅವಧಿಯಲ್ಲಿ ಕೆಳಗೆ ನಮೂದಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗತಕ್ಕದ್ದು. (1) ಅಕೌಂಟ್ಸ್ ಲೋಯರ್ (2) ರೆವಿನ್ಯೂ ಲೋಯರ್ (3) ಕನ್ನಡ ಭಾಷಾ ಪರೀಕ್ಷೆ (ಎಸ್.ಎಸ್.ಎಲ್.ಸಿ ಯಲ್ಲಿ ಕನ್ನಡ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ತೆಗೆದುಕೊಳ್ಳದಿದ್ದಲ್ಲಿ, ಕನ್ನಡ ಭಾಷೆ ಪರೀಕ್ಷೆಯನ್ನು ಪಾಸು ಮಾಡತಕ್ಕದ್ದು.) ಈ ಅವಧಿಯಲ್ಲಿ ನಿಗದಿತ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡದಿದ್ದಲ್ಲಿ ಅಥವಾ ಕೆಲಸ ಕಾರ್ಯಗಳು ತೃಪ್ತಿಕರವಾಗಿರದಿದ್ದಲ್ಲಿ ಅವರನ್ನು ಸೇವೆಯಿಂದ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977 ನಿಯಮ 6(1)ರಂತೆ ಸೇವೆಯಿಂದ ತೆಗೆದುಹಾಕಲಾಗುವುದು.
4. ಈ ನೇಮಕಾತಿಯು ಸಂಪೂರ್ಣ ತಾತ್ಕಾಲಿಕವಾಗಿದ್ದು ಸರ್ಕಾರವು ಇಚ್ಛಿಸಿದಲ್ಲಿ ಅಥವಾ ಹುದ್ದೆಗಳು ರದ್ದಾದಲ್ಲಿ ಅಥವಾ ಸಿಂಧುತ್ವದ ನೈಜತೆ ಸಾಬೀತಾಗದಿದ್ದಲ್ಲಿ ಅಥವಾ ಸುಳ್ಳು ಮಾಹಿತಿ ನೀಡಿ, ಉದ್ಯೋಗ ಪಡೆದಿರುವುದು ಕಂಡು ಬಂದಲ್ಲಿ ಅವರನ್ನು ಯಾವುದೇ ಸಮಯದಲ್ಲಿ ಯಾವುದೇ ಮುನ್ಸೂಚನೆ ಇಲ್ಲದೆ ಸೇವೆಯಿಂದ ತೆಗೆದುಹಾಕಲಾಗುವುದು.
5. ಅಭ್ಯರ್ಥಿಯು ಸೇವೆಗೆ ಹಾಜರಾಗುವ ಸಂದರ್ಭದಲ್ಲಿ ಭಾರತ ಸಂವಿಧಾನದ ರೀತ್ಯಾ "**ನಿಷ್ಠೆಯ ಪ್ರಮಾಣ ವಚನ**" ಸ್ವೀಕರಿಸತಕ್ಕದ್ದು.
6. ಅಭ್ಯರ್ಥಿಗಳು ಸರ್ಕಾರದ ಸಕ್ಷಮ ಜಿಲ್ಲಾ ವೈದ್ಯಕೀಯ ಪ್ರಾಧಿಕಾರದಿಂದ ಪಡೆದಿರುವ ದೈಹಿಕ ಅರ್ಹತಾ ಪ್ರಮಾಣ ಪತ್ರವನ್ನು ಕರ್ತವ್ಯಕ್ಕೆ ಹಾಜರಾದ ಸಂದರ್ಭದಲ್ಲಿ ತಹಶೀಲ್ದಾರ್ ಇವರಿಗೆ ಸಲ್ಲಿಸತಕ್ಕದ್ದು.
7. ಸರ್ಕಾರದ ಸುತ್ತೋಲೆ ಸಂ.ಕಂಇ 54 ಬಿಎಸ್‌ಸಿ 2007 ದಿನಾಂಕ: 27–03–2007ರ ಅನ್ವಯ ಅಂತರ ಜಿಲ್ಲಾ ವರ್ಗಾವಣೆಗೆ ತುಮಕೂರು ಜಿಲ್ಲೆಯಲ್ಲಿ ಕನಿಷ್ಠ ಪಕ್ಷ 05 ವರ್ಷಗಳ ಸೇವೆಯನ್ನು ಕಡ್ಡಾಯವಾಗಿ ಪೂರೈಸತಕ್ಕದ್ದು.
8. ಅಭ್ಯರ್ಥಿಗಳು ಉದ್ಯೋಗ ವಿನಿಮಯ ಕೇಂದ್ರದಲ್ಲಿ ನೋಂದಾಯಿಸಿದ್ದಲ್ಲಿ, ಗುರುತಿನ ಚೀಟಿಯನ್ನು ತಹಶೀಲ್ದಾರರು ಅಭ್ಯರ್ಥಿಗಳಿಂದ ಪಡೆದು ಉದ್ಯೋಗ ವಿನಿಮಯ ಕೇಂದ್ರಕ್ಕೆ ಸರಂಡರ್ ಮಾಡುವುದು.
9. ಅಭ್ಯರ್ಥಿಗಳು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳು 1958 ಕರ್ನಾಟಕ ನಾಗರಿಕ ಸೇವಾ (ಸಿಸಿಎ) ನಿಯಮಾವಳಿ 1957 ಕರ್ನಾಟಕ ನಾಗರಿಕ ಸೇವಾ ನಡತೆ ನಿಯಮಾವಳಿ 1966 ಹಾಗೂ ಕಾಲಕಾಲಕ್ಕೆ ಸರ್ಕಾರದಿಂದ ಹೊರಡಿಸಲಾಗುವ ಇತರೆ ನಿಯಮಾವಳಿಗಳಿಗೆ ಬದ್ಧರಾಗಿರುತ್ತಾರೆ.
10. ಇದು ನೇರ ನೇಮಕಾತಿ ಹುದ್ದೆ ಆದ ಕಾರಣ ಅಭ್ಯರ್ಥಿಯು ಸೇವೆಗೆ ಸೇರಿದ ದಿನಾಂಕದಿಂದ ಜ್ಯೇಷ್ಠತೆಯನ್ನು ಪರಿಗಣಿಸಲಾಗುವುದು.
11. ಗ್ರಾಮಲೆಕ್ಕಿಗರ ಹುದ್ದೆಗೆ ನೇಮಕಾತಿ ಹೊಂದಿರುವುದರಿಂದ ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವಾಗ ರೂ.1000–00 (ರೂಪಾಯಿಗಳು ಒಂದು ಸಾವಿರ ಮಾತ್ರ) ಭದ್ರತಾ ಠೇವಣಿಯನ್ನು ನಗದು ರೂಪದಲ್ಲಾಗಲೀ, ಅಥವಾ ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕವಾಗಲೀ ಸಂಬಂಧಪಟ್ಟ ತಹಸೀಲ್ದಾರ್‌ರವರಲ್ಲಿ ಹಾಜರುಪಡಿಸತಕ್ಕದ್ದು ಅಥವಾ ಈ ಮೊತ್ತಕ್ಕೆ ಭದ್ರತಾ ಮುಚ್ಚಳಿಕೆ ಪತ್ರವನ್ನು ಛಾಪಾ ಕಾಗದದಲ್ಲಿ ಬರೆಯಿಸಿ ಒಬ್ಬರ ಜಾಮೀನು ಕೊಡತಕ್ಕದ್ದು. ತಹಶೀಲ್ದಾರರು ಈ ಮೊತ್ತದ ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕ ಸರ್ಕಾರಕ್ಕೆ ಪ್ಲೆಡ್ಜ್ ಮಾಡಿಕೊಳ್ಳತಕ್ಕದ್ದು.
12. ಅಭ್ಯರ್ಥಿಯು ಇಲಾಖೆಯಿಂದ ಕಾಲಕಾಲಕ್ಕೆ ನಿಗದಿಪಡಿಸಿದ ಹಾಗೂ ನಿಗದಿಪಡಿಸಲಾಗುವ ವಿವಿಧ ಪರೀಕ್ಷೆ / ತರಬೇತಿಗಳನ್ನು ಯಶಸ್ವಿಯಾಗಿ ಮುಗಿಸತಕ್ಕದ್ದು.
13. ಈಗಾಗಲೇ ಸರ್ಕಾರಿ ಸೇವೆಯಲ್ಲಿರುವ ಹಾಗೂ ಇಲಾಖಾ ಮುಖ್ಯಸ್ಥರ ಮೂಲಕ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳು ನಿಯಮಾವಳಿಗಳನ್ನು ಉಲ್ಲಂಘಿಸಿ ಅರ್ಜಿ ಸಲ್ಲಿಸಿರುವುದಿಲ್ಲವೆಂಬ ಬಗ್ಗೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು ಹಾಗೂ ಮೇಲೆ ಸೂಚಿಸಿದ ಕಾರ್ಯಸ್ಥಳಗಳಲ್ಲಿ ವರದಿ ಮಾಡಿಕೊಳ್ಳುವ ಮೊದಲು ಮುಂಚಿನ ಸೇವೆಯಿಂದ ಬಿಡುಗಡೆ ಆದೇಶ ಪಡೆದಿರಬೇಕು.
14. ಅಭ್ಯರ್ಥಿಗಳು ತಮ್ಮ ಕುಟುಂಬದ ಒಟ್ಟು ಚರ–ಸ್ಥಿರ ಆಸ್ತಿಯ ವಿವರದ ಬಗ್ಗೆ ವರದಿಯನ್ನು ನಿಗಧಿಪಡಿಸಲಾಗಿರುವ ನಮೂನೆಯಲ್ಲಿ ಸಲ್ಲಿಸತಕ್ಕದ್ದು.
15. ಅಭ್ಯರ್ಥಿಗೆ ಕೆಲಸಕ್ಕೆ ಹಾಜರಾಗುವ ಸಂದರ್ಭದಲ್ಲಿ ಪ್ರಯಾಣ ಭತ್ಯೆ ಅಥವಾ ಇತರೆ ಯಾವುದೇ ಭತ್ಯೆಯನ್ನು ನೀಡಲಾಗುವುದಿಲ್ಲ.
16. ಈ ನೇಮಕಾತಿ ಆದೇಶದಲ್ಲಿನ ಅಭ್ಯರ್ಥಿಗಳ ವೇತನವನ್ನು ಪ್ರಥಮ ವೇತನ ಡ್ರಾ ಮಾಡಲು ಈ ಕಛೇರಿಯ ಆದೇಶ ಪಡೆಯದೆ ಡ್ರಾ ಮಾಡದಿರಲು ಸಂಬಂಧಪಟ್ಟ ತಹಸೀಲ್ದಾರ್‌ರವರಿಗೆ ಸೂಚಿಸಿದೆ.

**ಕೆ.ಎಸ್.ಸತ್ಯಮೂರ್ತಿ,**
ಜಿಲ್ಲಾಧಿಕಾರಿ,
ತುಮಕೂರು ಜಿಲ್ಲೆ.

P.R. 35
SC - 25

## ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು–560 001

**ವಿಷಯ** : 2013ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ಚಂದ್ರಶೇಖರ ಮರಿಯಪ್ಪ, ಗ್ರಾಮ ಲೆಕ್ಕಿಗರು, ಇವರು ರೆವಿನ್ಯೂ ಹೈಯರ್ ಭಾಗ–2ರ ವಿಷಯದ ಪರೀಕ್ಷಾ ಅವಧಿಯಲ್ಲಿ ತನ್ನ ಬಳಿ ಮೊಬೈಲ್ ಹೊಂದಿದ್ದ ದುರಾಚಾರ ಪ್ರಕರಣಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ :** 1. ಶ್ರೀ ಚಂದ್ರಶೇಖರ ಮರಿಯಪ್ಪ, ನೋಂದಣಿ ಸಂಖ್ಯೆ: 45026 ಇವರಿಗೆ ಜಾರಿ ಮಾಡಿದ ಆಯೋಗದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಪ(3)314/2013-14/ಪಿಎಸ್‌ಸಿ, ದಿನಾಂಕ: 21-12-2013.

2. ಶ್ರೀ ಚಂದ್ರಶೇಖರ ಮರಿಯಪ್ಪ, ಇವರ ಲಿಖಿತ ಸಮಜಾಯಿಷಿ ದಿನಾಂಕ: 30-12-2013.

3. ಕಡತ ಸಂಖ್ಯೆ: ಇಪ(3)283/2013-14/ಪಿಎಸ್‌ಸಿ ರಲ್ಲಿ ದಿನಾಂಕ: 16-01-2014ರ ಆಯೋಗದ ಆದೇಶ.

**ಪ್ರಸ್ತಾವನೆ :**

ಆಯೋಗವು ನಡೆಸಿದ 2013ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳ ಸಂಬಂಧ ದಿನಾಂಕ: 17-08-2013ರಂದು ನಡೆಸಲಾದ ರೆವಿನ್ಯೂ ಹೈಯರ್ ಭಾಗ-2ರ ವಿಷಯದ ಪರೀಕ್ಷೆಯ ಸಂದರ್ಭದಲ್ಲಿ ನೋಂದಣಿ ಸಂಖ್ಯೆ. 45026ರ ಅಭ್ಯರ್ಥಿಯಾದ ಶ್ರೀ ಚಂದ್ರಶೇಖರ ಮರಿಯಪ್ಪ, ಗ್ರಾಮ ಲೆಕ್ಕಿಗರು, ತಹಶೀಲ್ದಾರ್‌ರವರ ಕಛೇರಿ, ಗುಲ್ಬರ್ಗಾ ತಾಲ್ಲೂಕು ಮತ್ತು ಜಿಲ್ಲೆ ಗುಲ್ಬರ್ಗಾ-585101. ಇವರು ಪರೀಕ್ಷಾ ಸಮಯದಲ್ಲಿ ತನ್ನ ಬಳಿ ಮೊಬೈಲ್ ಹೊಂದಿರುವ ಮೂಲಕ ದುರಾಚಾರ ಎಸಗಿರುತ್ತಾರೆಂದು ಪರೀಕ್ಷಾ ಉಪ ಕೇಂದ್ರದ ಕೊಠಡಿ ಸಂವೀಕ್ಷಕರು ದಿನಾಂಕ: 17-08-2013ರಂದು ಆಯೋಗಕ್ಕೆ ವರದಿ ನೀಡಿರುತ್ತಾರೆ.

ಈ ವರದಿ ಮೇರೆಗೆ ಉಲ್ಲೇಖ-(1)ರಲ್ಲಿ ಓದಲಾದ ದಿನಾಂಕ:21-12-2013ರ ಕಾರಣ ಕೇಳುವ ನೋಟೀಸಿನಲ್ಲಿ ಆಪಾದಿತ ಅಭ್ಯರ್ಥಿಯಿಂದ ಲಿಖಿತ ಸಮಜಾಯಿಷಿಯನ್ನು ಕೇಳಲಾಗಿತ್ತು. ಸದರಿ ನೋಟೀಸಿಗೆ ಆಪಾದಿತರು ಉಲ್ಲೇಖ-(2)ರಲ್ಲಿ ಓದಲಾದ ದಿನಾಂಕ: 30-12-2013ರ ಲಿಖಿತ ಸಮಜಾಯಿಷಿಯಲ್ಲಿ ತಮ್ಮ ವಿರುದ್ಧ ಮಾಡಲಾದ ಪರೀಕ್ಷಾ ಸಮಯದಲ್ಲಿ ಮೊಬೈಲ್ ಹೊಂದಿರುವ ದುರಾಚಾರವನ್ನು ಒಪ್ಪಿಕೊಂಡಿರುವ ಕಾರಣ ಆಯೋಗದ ಮುಂದೆ ಸದರಿ ಸಮಜಾಯಿಷಿಯನ್ನು ಮಂಡಿಸಲಾಗಿ ಅಭ್ಯರ್ಥಿಯ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿರುವುದರಿಂದ ಆಯೋಗವು ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳು 1965ರನ್ವಯ ಹಾಗೂ ತತ್ಸಂಬಂಧದಲ್ಲಿ ಜಾರಿಗೊಳಿಸಲಾದ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ ಆಡಳಿತ.398/1993-94/ಪಿಎಸ್‌ಸಿ, ದಿನಾಂಕ: 14-07-1993ರನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಚಂದ್ರಶೇಖರ ಮರಿಯಪ್ಪ, ನೋಂದಣಿ ಸಂಖ್ಯೆ: 45026, ಇವರ 2013ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಗೊಳಿಸುವ ದಂಡನೆಯನ್ನು ವಿಧಿಸುವುದು ಸೂಕ್ತವೆಂದು ನಿರ್ಣಯಿಸಿರುವ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಇಪ(3) 483/2013-14/ಪಿಎಸ್‌ಸಿ, ಬೆಂಗಳೂರು. ದಿನಾಂಕ: 05-03-2014**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾದ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ ಆಡಳಿತ.398/1993-94/ಪಿಎಸ್‌ಸಿ, ದಿನಾಂಕ: 14-07-1993ರನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ನೋಂದಣಿ ಸಂಖ್ಯೆ: 45026ರ ಅಭ್ಯರ್ಥಿ ಶ್ರೀ ಚಂದ್ರಶೇಖರ ಮರಿಯಪ್ಪ, ಗ್ರಾಮ ಲೆಕ್ಕಿಗರು, ತಹಶೀಲ್ದಾರ್‌ರವರ ಕಛೇರಿ, ಗುಲ್ಬರ್ಗಾ ತಾಲ್ಲೂಕು ಮತ್ತು ಜಿಲ್ಲೆ ಗುಲ್ಬರ್ಗಾ-585101. ಇವರ ವಿರುದ್ಧದ ಆರೋಪವು ಸಾಬೀತಾಗಿರುವುದರಿಂದ ಈ ಅಭ್ಯರ್ಥಿಯ ಪ್ರಸಕ್ತ 2013ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸುವ ದಂಡನೆಯನ್ನು ವಿಧಿಸಿದೆ.

**ಮನೋಜ್ ಕುಮಾರ್ ಮೀನಾ ಭಾ.ಆ.ಸೇ.,**
ಕಾರ್ಯದರ್ಶಿ,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು-560 001

**P.R. 36**
**SC - 25**

## ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು-560 001

**ವಿಷಯ** : 2013ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಡಾ॥ ಅಪ್ಪಾರಾವ ಅರ್ಗಾಡೆ, ಆಯುಷ್ ವೈದ್ಯಾಧಿಕಾರಿ, ಇವರು ಅಕೌಂಟ್ಸ್ ಹೈಯರ್ ಪತ್ರಿಕೆ-1ರ ವಿಷಯದ ಪರೀಕ್ಷಾ ಅವಧಿಯಲ್ಲಿ ಮೊಬೈಲ್ ಫೋನ್ ಮೂಲಕ ಸಂಭಾಷಣೆ ನಡೆಸಿರುವ ದುರಾಚಾರ ಪ್ರಕರಣಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ :** 1. ಡಾ॥ ಅಪ್ಪಾರಾವ ಅರ್ಗಾಡೆ, ನೋಂದಣಿ ಸಂಖ್ಯೆ: 45059 ಇವರಿಗೆ ಜಾರಿ ಮಾಡಿದ ಆಯೋಗದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಪ(3)288/2013-14/ಪಿಎಸ್‌ಸಿ, ದಿನಾಂಕ: 09-12-2013.

2. ಡಾ॥ ಅಪ್ಪಾರಾವ ಅರ್ಗಾಡೆ, ಇವರ ಲಿಖಿತ ಸಮಜಾಯಿಷಿ ದಿನಾಂಕ: 13-12-2013.

3. ದಿನಾಂಕ: 04-02-2014ರ ಆಯೋಗದ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಆಯೋಗವು ನಡೆಸಿದ 2013ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳ ಸಂಬಂಧ ದಿನಾಂಕ: 11-08-2013ರಂದು ನಡೆಸಲಾದ ಅಕೌಂಟ್ಸ್ ಹೈಯರ್ ಪತ್ರಿಕೆ-1ರ ವಿಷಯದ ಪರೀಕ್ಷೆ ಸಂದರ್ಭದಲ್ಲಿ ನೋಂದಣಿ ಸಂಖ್ಯೆ. 45059ರ ಅಭ್ಯರ್ಥಿಯಾದ ಡಾ॥ ಅಪ್ಪಾರಾವ ಅರ್ಗಾಡೆ, ಆಯುಷ್ ವೈದ್ಯಾಧಿಕಾರಿ, ಸರ್ಕಾರಿ ಆಯುರ್ವೇದಿಕ್ ಆಸ್ಪತ್ರೆ, ಅಫ್‌ಜಲ್‌ಪುರ, ತಾಲ್ಲೂಕು, ಅಫ್‌ಜಲ್‌ಪುರ ಜಿಲ್ಲೆ ಗುಲ್ಬರ್ಗಾ-585301, ಇವರು ಪರೀಕ್ಷಾ ಸಮಯದಲ್ಲಿ ಮೊಬೈಲ್ ಫೋನ್‌ನಲ್ಲಿ ಸಂಭಾಷಣೆ ನಡೆಸುವ ಮೂಲಕ ದುರಾಚಾರ ಎಸಗಿರುತ್ತಾರೆಂದು ಮುಖ್ಯೋಪಾಧ್ಯಾಯರು, ನೂತನ ವಿದ್ಯಾಲಯ, ಕನ್ಯಾ ಪ್ರೌಢಶಾಲೆ, ಗುಲ್ಬರ್ಗಾ, ಇವರು ದಿನಾಂಕ: 13-08-2013ರಂದು ಆಯೋಗಕ್ಕೆ ವರದಿ ನೀಡಿರುತ್ತಾರೆ.

ಈ ವರದಿ ಮೇರೆಗೆ ಉಲ್ಲೇಖ-(1)ರಲ್ಲಿ ಓದಲಾದ ದಿನಾಂಕ: 09-12-2013ರ ಕಾರಣ ಕೇಳುವ ನೋಟೀಸಿನಲ್ಲಿ ಆಪಾದಿತ ಅಭ್ಯರ್ಥಿಯಿಂದ ಲಿಖಿತ ಸಮಜಾಯಿಷಿಯನ್ನು ಕೇಳಲಾಗಿತ್ತು. ಸದರಿ ನೋಟೀಸಿಗೆ ಆಪಾದಿತರು ಉಲ್ಲೇಖ-(2)ರಲ್ಲಿ ಓದಲಾದ ದಿನಾಂಕ: 13-12-2013ರ ಲಿಖಿತ ಸಮಜಾಯಿಷಿಯಲ್ಲಿ ತಮ್ಮ ವಿರುದ್ಧ ಮಾಡಲಾದ ಪರೀಕ್ಷಾ ಸಮಯದಲ್ಲಿ ಮೊಬೈಲ್ ಮೂಲಕ ಸಂಭಾಷಣೆಯನ್ನು ನಡೆಸಿರುವ ಆರೋಪವನ್ನು ಒಪ್ಪಿಕೊಂಡಿರುವ ಕಾರಣ ಆಯೋಗದ ಸಭೆಯ ಮುಂದೆ ಸದರಿ ಸಮಜಾಯಿಷಿಯನ್ನು ಮಂಡಿಸಲಾಗಿ ಅಭ್ಯರ್ಥಿಯ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿರುವುದರಿಂದ ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳು 1965ರನ್ವಯ ಹಾಗೂ ತತ್ಸಂಬಂಧದಲ್ಲಿ

ಜಾರಿಗೊಳಿಸಲಾದ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ ಆಡಳಿತ.398/1993–94/ಪಿಎಸ್‌ಸಿ, ದಿನಾಂಕ: 14–07–1993ರನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಡಾ॥ ಅಪ್ಪಾರಾವ ಅರ್ಗಾಡೆ, ನೋಂದಣಿ ಸಂಖ್ಯೆ: 45059, ಇವರ 2013ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಗೊಳಿಸುವುದರ ಜೊತೆಗೆ ಆಯೋಗವು ನಡೆಸುವ ಮುಂದಿನ ಒಂದು ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಹಾಜರಾಗದಂತೆ ಡಿಬಾರ್ ದಂಡನೆಯನ್ನು ವಿಧಿಸುವುದು ಸೂಕ್ತವೆಂದು ಉಲ್ಲೇಖ–(3)ರಲ್ಲಿನ ದಿನಾಂಕ:04–02–2014ರ ಆಯೋಗದ ಸಭೆಯಲ್ಲಿ ನಿರ್ಣಯಿಸಿರುವ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಇಪ(3) 482/2013–14/ಪಿಎಸ್‌ಸಿ, ಬೆಂಗಳೂರು. ದಿನಾಂಕ: 05–03–2014**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾದ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ ಆಡಳಿತ.398/1993–94/ಪಿಎಸ್‌ಸಿ, ದಿನಾಂಕ: 14–07–1993ರನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ನೋಂದಣಿ ಸಂಖ್ಯೆ: 45059ರ ಅಭ್ಯರ್ಥಿ ಡಾ॥ ಅಪ್ಪಾರಾವ ಅರ್ಗಾಡೆ, ಆಯುಷ್ ವೈದ್ಯಾಧಿಕಾರಿ, ಸರ್ಕಾರಿ ಆಯುರ್ವೇದಿಕ್ ಆಸ್ಪತ್ರೆ, ಅಫ್‌ಜಲ್‌ಪುರ, ತಾಲ್ಲೂಕು, ಅಫ್‌ಜಲ್‌ಪುರ ಜಿಲ್ಲೆ ಗುಲ್ಬರ್ಗಾ–585301, ಇವರ ವಿರುದ್ಧದ ಆರೋಪವು ಸಾಬೀತಾಗಿರುವುದರಿಂದ ಈ ಅಭ್ಯರ್ಥಿಯ ಪ್ರಸಕ್ತ 2013ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯ ಅಭ್ಯರ್ಥಿತ್ವವೂ ಸೇರಿದಂತೆ ಆಯೋಗವು ನಡೆಸುವ ಮುಂದಿನ ಒಂದು ಅಧಿವೇಶನ ಅಂದರೆ 2013ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಹಾಜರಾಗದಂತೆ ಡಿಬಾರ್ ಮಾಡುವ ದಂಡನೆಯನ್ನು ವಿಧಿಸಿದೆ.

**ಮನೋಜ್ ಕುಮಾರ್ ಮೀನಾ ಭಾ.ಆ.ಸೇ.,**
ಕಾರ್ಯದರ್ಶಿ,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು–560 001

**P.R. 37**
**SC - 25**

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ತಿದ್ದುಪಡಿ–I**

**ಸಂಖ್ಯೆ : ಪಸಂಮೀ 246 ಪಸಸೇ 2013, ಬೆಂಗಳೂರು, ದಿನಾಂಕ: 22ನೇ ಫೆಬ್ರವರಿ, 2014.**

ಸರ್ಕಾರದ ಅಧಿಸೂಚನೆ ಸಂಖ್ಯೆ: ಪಸಂಮೀ 246 ಪಸಸೇ 2013, ದಿನಾಂಕ: 12–02–2014ರ ಅಧಿಸೂಚನೆ–I ರ ಅನುಬಂಧ–1ರಲ್ಲಿ ಕೆಳಕಂಡಂತೆ ನಿಯುಕ್ತಿಗೊಳಿಸಲಾದ ಸ್ಥಳವನ್ನು ಮಾರ್ಪಾಡು ಮಾಡಲಾಗಿದೆ.

| ಕ್ರ. ಸಂ. | ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 246 ಪಸಸೇ 2013, ದಿನಾಂಕ: 12–02–2014ರ ಅಧಿಸೂಚನೆ–I ರ ಅನುಬಂಧ–1 ರಲ್ಲಿದ್ದಂತೆ | | | | ಪ್ರಸ್ತುತ ನೇಮಕಾತಿಯಲ್ಲಿ ಮಾರ್ಪಾಡು ಮಾಡಿ ನಿಯೋಜಿಸಿದ ಸ್ಥಳ |
|---|---|---|---|---|---|
| | ಕ್ರ.ಸಂ. | ಹೆಸರು | ವಿಳಾಸ | ನಿಯುಕ್ತಿಗೊಳಿಸಲಾಗಿದ್ದ ಸ್ಥಳ | |
| 1 | 18 | ಸುಪ್ರಿಯಾ | ಗಂಡ ಶಶಿಭೂಷಣ್, ಕೇರ್‌ಆಫ್ ಶ್ರೀ ಬಸಪ್ಪ ಜೆ.ಮಿರ್ಜಿ, ನಂ.211/1, 4ನೇ ಅಡ್ಡರಸ್ತೆ, ಓಂಕಾರ್ ನಗರ, ಅರಕೇರಿ, ಬನ್ನೇರಘಟ್ಟ ರಸ್ತೆ, ಬೆಂಗಳೂರು–560 076. | ಪಶು ಚಿಕಿತ್ಸಾಲಯ, ವಿ.ಆರ್.ದೊಡ್ಡಿ, ಕನಕಪುರ ತಾ॥, ರಾಮನಗರ ಜಿ॥. | ಪಶು ಚಿಕಿತ್ಸಾಲಯ, ಅರೆಅಂಗಡಿ, ಹೊನ್ನಾವರ ತಾ॥, ಉತ್ತರ ಕನ್ನಡ ಜಿ॥. |
| 2 | 41 | ಪಾಟೀಲ್ ಸುಪ್ರಿಯಾ ನರಸಿಂಗ ರಾವ್ | ತಂದೆ ಪಾಟೀಲ್ ನರಸಿಂಗರಾವ್, ಗೋವಿಂದರಾವ್, ನಂ.48, ಕೇರ್ ಆಫ್ ಫೆಮಿನಾ ವಿವಿಂದ ಮೌಂಟ್ ಕಾರ್ಮೆಲ್ ಕಾಲೇಜ್ ಹತ್ತಿರ, 6ನೇ ಅಡ್ಡ ರಸ್ತೆ, ವಸಂತ ನಗರ, ಬೆಂಗಳೂರು–560 052. | ಪಶು ಚಿಕಿತ್ಸಾಲಯ, ಬಿರುನಾಣಿ, ವಿರಾಜಪೇಟೆ ತಾ॥, ಕೊಡಗು ಜಿ॥. | ಪಶು ಚಿಕಿತ್ಸಾಲಯ, ಹನುಮನಗರ ತಾಂಡಾ, ಬಸವಕಲ್ಯಾಣ ತಾ॥, ಬೀದರ್ ಜಿ॥. |
| 3 | 67 | ಅಭಿಘ್ನ್ಯ ಕೃಷ್ಣ | ತಂದೆ ಕೃಷ್ಣಾ ಎಂ.ಆರ್. ನಂ.896, 9ಎ ಅಡ್ಡ ರಸ್ತೆ, 11ನೇ ಮುಖ್ಯರಸ್ತೆ, ವೆಸ್ಟ್ ಆಫ್ ಕಾರ್ಡ್ ರೋಡ್, 2ನೇ ಹಂತ, ಮಹಾಲಕ್ಷ್ಮಿಪುರಂ, ಬೆಂಗಳೂರು–560 086. | ಪಶು ಚಿಕಿತ್ಸಾಲಯ, ಸಾಬರಕಟ್ಟೆ, ಉಡುಪಿ ತಾ॥, ಜಿ॥. | ಪಶು ಚಿಕಿತ್ಸಾಲಯ, ಶ್ರೀನಿವಾಸಪುರ, ನೆಲಮಂಗಲ ತಾ., ಬೆಂಗಳೂರು ಗ್ರಾಮಾಂತರ ಜಿಲ್ಲೆ. |
| 4 | 79 | ಅನಿತಾ ಶ್ರೀರಾಮ್ | ತಂದೆ ರಾಮಚಂದ್ರ .ಎ, ಶ್ರೀ ಅನ್ನಪೂರ್ಣೇಶ್ವರಿ ನಿಲಯ, 231, ಸಂತೆ ಮಾರ್ಕೆಟ್, ಚಾಮರಾಜಪೇಟ್, ಚಿಕ್ಕಬಳ್ಳಾಪುರ–562101 | ಪಶು ಚಿಕಿತ್ಸಾಲಯ, ಆರೂಡಿ, ದೊಡ್ಡಬಳ್ಳಾಪುರ ತಾ॥, ಬೆಂಗಳೂರು (ಗ್ರಾ) ಜಿ॥. | ಪಶು ಚಿಕಿತ್ಸಾಲಯ, ಮುತ್ಸಂದ್ರ, ಹೊಸಕೋಟೆ ತಾ॥, ಬೆಂಗಳೂರು (ನಗರ) ಜಿ॥. |
| 5 | 94 | ಅಮಿತ್ ಮಠಾಣಿಕರ್ | ತಂದೆ ಮಠಾಣಿಕರ್, ನಂ.81, ಕುಮಾರ್ ನಗರ, ಅಕ್ಕಿ ಆಲೂರು, ಹಾನಗಲ್ ತಾ: ಹಾವೇರಿ ಜಿಲ್ಲೆ – 581102 | ಪಶು ಚಿಕಿತ್ಸಾಲಯ, ಹುಲಗೂರು, ಶಿಗ್ಗಾಂವ್ ತಾ॥, ಹಾವೇರಿ ಜಿ॥. | ಪಶು ಚಿಕಿತ್ಸಾಲಯ, ಅರಳೇಶ್ವರ, ಹಾನಗಲ್ ತಾ॥, ಹಾವೇರಿ ಜಿಲ್ಲೆ. |

| ಕ್ರ ಸಂ. | ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 246 ಪಸಸೇ 2013, ದಿನಾಂಕ: 12–02–2014ರ ಅಧಿಸೂಚನೆ–I ರ ಅನುಬಂಧ–1 ರಲ್ಲಿದ್ದಂತೆ | | | | ಪ್ರಸ್ತುತ ನೇಮಕಾತಿಯಲ್ಲಿ ಮಾರ್ಪಾಡು ಮಾಡಿ ನಿಯೋಜಿಸಿದ ಸ್ಥಳ |
|---|---|---|---|---|---|
| | ಕ್ರ.ಸಂ. | ಹೆಸರು | ವಿಳಾಸ | ನಿಯುಕ್ತಿಗೊಳಿಸಲಾಗಿದ್ದ ಸ್ಥಳ | |
| 6 | 124 | ಕೃತಿಕಾ ಹೆಚ್.ಕೆ. | ತಂದೆ ಕೃಷ್ಣೇಗೌಡ ಹೆಚ್.ಎಂ.<br>ನಂ.13, 6ನೇ ಮುಖ್ಯರಸ್ತೆ, 8ನೇ ಬಿ ಅಡ್ಡರಸ್ತೆ,<br>ಸೂರ್ಯ ಡಿಪಾರ್ಟ್‌ಮೆಂಟ್ ಸ್ಟೋರ್ ಹತ್ತಿರ,<br>ಜ್ಞಾನಜ್ಯೋತಿನಗರ, ಮಲ್ಲತ್ತಳ್ಳಿ,<br>ಬೆಂಗಳೂರು – 560056 | ಪಶು ಚಿಕಿತ್ಸಾಲಯ,<br>ಹುಲ್ಲೇನಹಳ್ಳಿ,<br>ಮಾಗಡಿ ತಾ॥,<br>ರಾಮನಗರ ಜಿ॥. | ಪಶು ಚಿಕಿತ್ಸಾಲಯ,<br>ಗಾನಕಲ್ಲು,<br>ರಾಮನಗರ ತಾ॥, ಜಿ॥. |
| 7 | 125 | ವಿಜಯಲಕ್ಷ್ಮಿ<br>ಗುಂಡಳ್ಳಿ | ತಂದೆ ಎಂ.ಐ.ಗುಂಡಳ್ಳಿ,<br>ಓಂನಗರ, ಐ.ಪಿ.ಗೋಡನ್ ಹತ್ತಿರ,<br>ಬಸವನಬಾಗೇವಾಡಿ,<br>ಬಿಜಾಪುರ–586203 | ಪಶು ಚಿಕಿತ್ಸಾಲಯ,<br>ಮೊರಟಗಿ, ಸಿಂದಗಿ ತಾ॥,<br>ಬಿಜಾಪುರ ಜಿ॥. | ಪಶು ಚಿಕಿತ್ಸಾಲಯ, ಮುತ್ತಗಿ,<br>ಬಸವನಬಾಗೇವಾಡಿ,<br>ಬಿಜಾಪುರ ಜಿಲ್ಲೆ. |
| 8 | 140 | ಸುನಿತಾ ಸಿ.ಆರ್. | ತಂದೆ ರಾಮಪ್ಪ ಸಿ.ಹೆಚ್.,<br>ಚೀರನಹಳ್ಳಿ ಅಂಚೆ,<br>ಶಿವನಿ ಹೋಬಳಿ, ತರೀಕೆರೆ ತಾ॥,<br>ಚಿಕ್ಕಮಗಳೂರು ಜಿಲ್ಲೆ – 577549. | ಪಶು ಚಿಕಿತ್ಸಾಲಯ,<br>ಚಂಡಿಯಾ,<br>ಕಾರವಾರ ತಾ॥,<br>ಉ.ಕ. ಜಿ॥. | ಪಶು ಚಿಕಿತ್ಸಾಲಯ,<br>ಅಣೂರು,<br>ಚಿಕ್ಕಮಗಳೂರು ತಾ॥, ಜಿ॥. |
| 9 | 152 | ಸುರೇಶ್ ಅವಟೆ | ತಂದೆ ಕುಶರಂತ್ ಅವಟೆ,<br>ಅಫಜಲಪುರ ಅಂಚೆ,<br>ಗುಲ್ಬರ್ಗಾ – 585301. | ಪಶು ಚಿಕಿತ್ಸಾಲಯ,<br>ಹತ್ತಿಗೂಡೂರು, ಶಹಾಪುರ<br>ತಾ॥, ಯಾದಗಿರಿ ಜಿ॥. | ಪಶು ಚಿಕಿತ್ಸಾಲಯ,<br>ದೇವಲಗಾಣಗಾಪುರ,<br>ಅಫ್ಜಲ್‌ಪುರ ತಾ॥,<br>ಗುಲ್ಬರ್ಗಾ ಜಿ॥. |
| 10 | 159 | ಸಿಂಧು ಕೆ ದರ್ಶಿನಿ | ತಂದೆ ಕನಕಾಕ್ಷ, ಕೇರ್ ಆಫ್<br>ಲೇಟ್ ಎಂ.ರಾಜಶೇಖರಯ್ಯ, ನಿವೃತ್ತ ಸ್ಕೂಲ್<br>ಮಾಸ್ಟರ್, ಕೀರ್ತಿನಗರ, ಮಳವಳ್ಳಿ ತಾ॥,<br>ಮಂಡ್ಯ– 571403. | ಪಶು ಚಿಕಿತ್ಸಾಲಯ,<br>ಅರೆಅಂಗಡಿ, ಹೊನ್ನಾವರ<br>ತಾ॥, ಉ.ಕ.ಜಿ॥. | ಪಶು ಚಿಕಿತ್ಸಾಲಯ,<br>ತಳಗವಾದಿ, ಮಳವಳ್ಳಿ ತಾ॥,<br>ಮಂಡ್ಯ ಜಿ॥. |
| 11 | 170 | ಜ್ಞಾನವತಿ. ಎಸ್ | ತಂದೆ ಶಂಕರಪ್ಪ ಎನ್.<br>ವಡ್ಡಹಳ್ಳಿ ವಿಲೇಜ್, ಪದಮ್‌ಘಟ್ಟ ಅಂಚೆ,<br>ಮಾಲೂರು ತಾ॥,<br>ಕೋಲಾರ – 563132 | ಪಶು ಚಿಕಿತ್ಸಾಲಯ,<br>ಸುಂಡವಾಳು,<br>ಪಿರಿಯಾಪಟ್ಟಣ ತಾ॥,<br>ಮೈಸೂರು ಜಿ॥. | ಪಶು ಚಿಕಿತ್ಸಾಲಯ,<br>ತೊಪ್ಪನಹಳ್ಳಿ,<br>ಬಂಗಾರಪೇಟೆ ತಾ.,<br>ಕೋಲಾರ ಜಿ॥. |
| 12 | 174 | ಶರೋನ್ ಸಂಗೀತಾ | ತಂದೆ ಶೆಲ್‌ಹಾನ್,<br>ನಂ.8–4–135, ಶಹಜಾನ್ ಜನವಾಡ ರಸ್ತೆ<br>ಹೊರಭಾಗ, ಲೇಬರ್ ಕಾಲೋನಿ,<br>ಕಲಾಮಂಡಲ ಹತ್ತಿರ, ಬೀದರ್ – 585401. | ಪಶು ಚಿಕಿತ್ಸಾಲಯ,<br>ಮಾಲಗತ್ತಿ, ಕುಷ್ಟಗಿ ತಾ॥,<br>ಕೊಪ್ಪಳ ಜಿ॥. | ಪಶು ಚಿಕಿತ್ಸಾಲಯ,<br>ಬೇಲೂರ,<br>ಬಸವಕಲ್ಯಾಣ ತಾ॥,<br>ಬೀದರ್ ಜಿ॥. |
| 13 | 191 | ಕಾವ್ಯ ಕೆ | ತಂದೆ ಆರ್.ಕಾಳಿದಾಸ್,<br>ಕಲ್ಪವೃಕ್ಷ ನಿಲಯ, ವಿನೋಬನಗರ,<br>2ನೇ ಹಂತ, ಆಟೋ ಕಾಂಪ್ಲೆಕ್ಸ್,<br>ಶಿವಮೊಗ್ಗ – 577204 | ಪಶು ಚಿಕಿತ್ಸಾಲಯ,<br>ಹಾರೋಗೊಪ್ಪ,<br>ಶಿಕಾರಿಪುರ ತಾ॥,<br>ಚಿಕ್ಕಮಗಳೂರು ತಾ॥, ಜಿ॥. | ಪಶು ಚಿಕಿತ್ಸಾಲಯ,<br>ಶಿರವಂತೆ, ಸಾಗರ ತಾ॥,<br>ಶಿವಮೊಗ್ಗ ಜಿಲ್ಲೆ. |
| 14 | 199 | ನವ್ಯಶ್ರೀ ಟಿ.ಸಿ. | ತಂದೆ ಚಂದ್ರಶೇಖರ್ ಬಿ.ಕೆ.<br>ನಂ.11, ಕೇರ್ ಆಫ್ ವೆಂಕಟರಾಮು,<br>ವೆಂಕಟರಾದ್ರಿ ನಿಲಯ, 6ನೇ ಕ್ರಾಸ್,<br>6ನೇ ಅಡ್ಡರಸ್ತೆ, ವಸಂತಪ್ಪ ಬ್ಲಾಕ್, ಗಂಗಾನಗರ,<br>ಬೆಂಗಳೂರು– 560032. | ಪಶು ಚಿಕಿತ್ಸಾಲಯ,<br>ಹುಲಿಕಲ್, ಅರಕಲಗೂಡು,<br>ಹಾಸನ ಜಿ॥. | ಪಶು ಚಿಕಿತ್ಸಾಲಯ,<br>ತೊಂಡಿಗೆರೆ,<br>ತುಮಕೂರು ತಾ॥, ಜಿ॥. |

| ಕ್ರ. ಸಂ. | ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 246 ಪಸಸೇ 2013, ದಿನಾಂಕ: 12-02-2014ರ ಅಧಿಸೂಚನೆ-I ರ ಅನುಬಂಧ-1 ರಲ್ಲಿದ್ದಂತೆ | | | | ಪ್ರಸ್ತುತ ನೇಮಕಾತಿಯಲ್ಲಿ ಮಾರ್ಪಾಡು ಮಾಡಿ ನಿಯೋಜಿಸಿದ ಸ್ಥಳ |
|---|---|---|---|---|---|
| | ಕ್ರ.ಸಂ. | ಹೆಸರು | ವಿಳಾಸ | ನಿಯುಕ್ತಿಗೊಳಿಸಲಾಗಿದ್ದ ಸ್ಥಳ | |
| 15 | 229 | ಚೇತನ್ ಜಿ.ಪಿ | ತಂದೆ ಪೂವಯ್ಯ ಸಿ.ಎಂ. ಕೇರ್ಆಫ್ ಮಂಜುಳ ಸಿ.ಪಿ.18/4, 2ನೇ ಮಹಡಿ, ರಾಜರಾಜೇಶ್ವರಿ ನಿಲಯ, ಆರ್.ಬಿ.ಐ ಕಾಲೋನಿ, ಆನಂದನಗರ, ಬೆಂಗಳೂರು-560024. | ಪಶು ಚಿಕಿತ್ಸಾಲಯ, ಕೋರವಾರ, ಸಿಂದಗಿ ತಾ॥, ಬಿಜಾಪುರ ಜಿ॥. | ಪಶು ಚಿಕಿತ್ಸಾಲಯ, ವ್ಯಾಸರಾಜನಪುರ, ಟಿ.ನರಸೀಪುರ ತಾ॥. ಮೈಸೂರು ಜಿ॥. |
| 16 | 236 | ಶ್ವೇತಾ ಎಸ್ | ಗಂಡ ಸುಖೇಶ್ ಎಸ್ ಕೇರ್ಆಫ್ ನಾಗೇಶ್ ಎಂ, ಮಾಳಗಾಳು ಗ್ರಾಮ, ಕಸಬಾ ಹೋಬಳಿ, ಜವನಮ್ಮನದೊಡ್ಡಿ ರಸ್ತೆ, ಕನಕಪುರ, ರಾಮನಗರ - 562 117. | ಪಶು ಚಿಕಿತ್ಸಾಲಯ, ಸೊರಟೂರ, ಗದಗ ತಾ॥, ಜಿ॥. | ಪಶು ಚಿಕಿತ್ಸಾಲಯ, ಹೊಸದುರ್ಗ, ಕನಕಪುರ ತಾ॥, ರಾಮನಗರ ಜಿ॥. |
| 17 | 244 | ಸೈಯದ್ ಶಗುಫ್ತಾ ರೆಹಮಾನ್ | ತಂದೆ ಸೈಯದ್ ರೆಹಮಾನ್ ಕೀಲಗಣಿ ಗ್ರಾಮ, ಮುಳಬಾಗಿಲು ತಾ॥, ಎಮ್ಮೆನತ್ತ ಅಂಚೆ, ಕೋಲಾರ - 563131. | ಪಶು ಚಿಕಿತ್ಸಾಲಯ, ಬೆಂಡೆಬೆಂಬಳ್ಳಿ, ಶಹಾಪುರ ತಾ॥, ಯಾದಗಿರಿ ಜಿ॥. | ಪಶು ಚಿಕಿತ್ಸಾಲಯ, ನಂಗಲಿ, ಮುಳಬಾಗಿಲು ತಾ॥, ಕೋಲಾರ ಜಿ॥. |
| 18 | 256 | ಶಶಿಭೂಷಣ್ | ತಂದೆ ರಾಮ್ ಸ್ವರ್ತ್ ಪ್ರಸಾದ್ ಸ್ಥಿನ್ನಾ ಕೇರ್ ಆಫ್ ಶ್ರೀ ಬಸಪ್ಪ ಜೆ. ಮಿರಗಿ, ನಂ.211/1, 4ನೇ ಅಡ್ಡರಸ್ತೆ, ಓಂಕಾರ ನಗರ, ಅರಕೆರೆ, ಬಿ.ಜಿ.ರಸ್ತೆ, ಬೆಂಗಳೂರು - 560 076 | ಪಶು ಚಿಕಿತ್ಸಾಲಯ, ರಾಂಪುರ, ಮೊಳಕಾಲ್ಮೂರು ತಾ॥, ಚಿತ್ರದುರ್ಗ ಜಿ॥. | ಪಶು ಚಿಕಿತ್ಸಾಲಯ, ಸಂತೆಗುಳಿ, ಕುಮಟಾ ತಾ॥, ಉತ್ತರ ಕನ್ನಡ ಜಿ॥. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಪ್ರಸನ್ನ,**

ಪೀಠಾಧಿಕಾರಿ-2,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಪಶುಸಂಗೋಪನೆ-ಎ).

**P.R. 30**
**SC - 100**

## FORM 1

**(See Rule 9)**

**OFFICE OF THE BLOCK EDUCATION OFFICER,**

**Dharwad Taluka Range, Dharwad**

**NOTIFICATION**

**Sri SHANKARAPPA. NINGAPPA. MADAR,** Working as Assistant Teacher in the Govt-Higher Primary School Halligeri, Taluk, Dharwad (Education Department) of Office of the Block Education Officer Dharwad Taluka Range is permitted to change his name as **Sri SHANKARAPPA NINGAPPA DODDAMANI.**

**BLOCK EDUCATIONAL OFFICER**
**TALUKA RANGE DHARWAD**

**P.D. C/n 40**
**SC – 10**

## FORM IV

**(See Rule 12)**

**NOTICE**

It is hereby notified that the undersigned has changed his name from **H.T. BHAJANTRI** to **B.T. HANUMANTH.**

**H.T. BHAJANTRI**

**P.D. C/n 41**
**SC - 10**

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**FORM IV**

**(See Rule 12)**

**NOTICE**

It is hereby notified that the undersigned has changed his/her name from **IISHA PARVEEN** to **SYEEDA IISHA.**

**P.D. C/n 42** **IISHA PARVEEN**

**SC - 10**

**FORM IV**

**(See Rule 12)**

**NOTICE**

It is hereby notified that the undersigned has changed his name from **RUDRAPPA DYAVAPPA MADAR** to **RUDRAPPA DYAVAPPA SANDIMANI.**

**P.D. C/n 43** **RUDRAPPA DYAVAPPA MADAR**

**SC - 10**

**FORM IV**

**(See Rule 12)**

**NOTICE**

It is hereby notified that the undersigned has changed his name **from BHAGANNA YALLAPPA SAMAGAR** to **BHAGANNA YALLAPPA NAGATHAN.**

**P.D. C/n 44** **BHAGANNA YALLAPPA SAMAGAR**

**SC - 10**

**ನಮೂನೆ–1**

**(ನಿಯಮ–9)**

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆ**

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು**

**ಅಧಿಸೂಚನೆ**

**ದಿನಾಂಕ 17–03–2014**

**ಶ್ರೀ ಸದಾನಂದ ಚಲವಾದಿ** ಕಿ.ವೈ.ಪ್ರ. ಶಾಲಾ, ಟೆಕ್ನಾಲಾಜಿಸ್ಟ್, ಪ್ರಾ.ಆ.ಕೇಂದ್ರ, ಸೂರ್ಲಬ್ಬಿ, ಸೋಮವಾರಪೇಟೆ ತಾಲ್ಲೂಕು, ಕೊಡಗು ಜಿಲ್ಲೆ ಇಲ್ಲಿ ಕೆಲಸ ನಿರ್ವಹಿಸುತ್ತಿದ್ದು ಇವರ ಹೆಸರನ್ನು **ಹೆಚ್. ಸದಾನಂದ** ಎಂದು ಬದಲಾವಣೆಗೆ ಅನುಮತಿ ನೀಡಲಾಗಿದೆ.

**ನಿರ್ದೇಶಕರು,**
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು
ಬೆಂಗಳೂರು

**P.D. C/n 45**

**SC - 10**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59